# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 419
2. ಸದಸ್ಯರ ಹೆಸರು : ಶ್ರೀ ಅ.ದೇವೇಗೌಡ
3. ಉತ್ತರಿಸಬೇಕಾದ ದಿನಾಂಕ : 16-12-2021

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಶ್ರೀರಂಗ ನೀರಾವರಿ ಯೋಜನೆ ಪ್ರಾರಂಭಿಸಲು ಸರ್ಕಾರ ಏನು ಕ್ರಮ ಕೈಗೊಂಡಿದೆ; | ಶ್ರೀರಂಗ ನೀರಾವರಿ ಯೋಜನೆಯಲ್ಲಿ ಹೇಮಾವತಿ ಯೋಜನೆಯಡಿ ಬರುವ ತುಮಕೂರು ಶಾಖಾ ನಾಲೆಯ ಸರಪಳಿ:192.300 ಕಿ.ಮೀ ಯಿಂದ 843.71 ಎಂ.ಸಿ.ಎಫ್.ಟಿ ನೀರನ್ನು ಎತ್ತಿ ರಾಮನಗರ ಜಿಲ್ಲೆ ಮಾಗಡಿ ತಾಲ್ಲೂಕಿನ 66 ಕೆರೆಗಳಿಗೆ ಹಾಗೂ ತುಮಕೂರು ಜಿಲ್ಲೆ ಕುಣಿಗಲ್ ತಾಲ್ಲೂಕಿನ ಹುತ್ರಿದುರ್ಗ ಹೋಬಳಿಯ 17 ಕೆರೆಗಳಿಗೆ ಕುಡಿಯುವ ನೀರಿಗಾಗಿ ಒಟ್ಟು 83 ಕೆರೆಗಳನ್ನು ತುಂಬಿಸುವ ಯೋಜನೆಯ ರೂ.277.50 ಕೋಟಿಗಳ ಅಂದಾಜಿಗೆ ದಿನಾಂಕ:28-02-2014 ರಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿತ್ತು. ಸದರಿ ಕಾಮಗಾರಿಯನ್ನು ದಿನಾಂಕ:23-12-2015 ರಂದು 24 ತಿಂಗಳ ಕಾಲಾವಧಿಗೆ ನಿಗದಿಪಡಿಸಿ ಟೆಂಡರ್ ಆಧಾರದ ಮೇಲೆ ರೂ.324.67 ಕೋಟಿಗಳ ಮೊತ್ತಕ್ಕೆ ಕರಾರು ವಹಿಸಲಾಗಿರುತ್ತದೆ. |
| ಆ | ಈ ಯೋಜನೆ ಅನುಷ್ಠಾನಕ್ಕೆ ತರಲು ಸರ್ಕಾರಕ್ಕೆ ಇರುವ ತೊಂದರೆಗಳೇನು; | ಯೋಜನೆಯ ಗ್ರಾವಿಟಿ ಮೈನ್‌ನಲ್ಲಿ PSC ಪೈಪುಗಳನ್ನು ಅಳವಡಿಸಲು ಅಂದಾಜಿನಲ್ಲಿ ಪ್ರಾವಿಧಾನ ಮಾಡಲಾಗಿದ್ದು, ಪ್ರಸ್ತುತ PSC ಪೈಪುಗಳ ತಯಾರಿಕೆ ಘಟಕಗಳು ವಿರಳವಾಗಿರುವುದರಿಂದ, ನಿಗದಿತ ಕಾಲಮಿತಿಯೊಳಗೆ ಸರಬರಾಜಿನಲ್ಲಿ ವ್ಯತ್ಯಯ ಉಂಟಾಗಿ PSC ಪೈಪುಗಳ ಬದಲಿಗೆ MS ಮತ್ತು DI ಪೈಪುಗಳನ್ನು ಅಳವಡಿಸಲು ಪ್ರಸ್ತಾಪಿಸಿರುವುದರಿಂದಲೂ ಹಾಗೂ ಖಾಸಗಿ ಜಮೀನಿನ ಭೂಸ್ವಾಧೀನವನ್ನು ಮಿತಿಗೊಳಿಸುವ ದೃಷ್ಟಿಯಿಂದ ಗ್ರಾವಿಟಿ ಮೈನ್ ಪೈಪ್‌ನ್ನು ರಸ್ತೆ ಬದಿಯಲ್ಲಿ ಕೊಂಡೊಯ್ದರಿಂದ ಪರಿಮಾಣದಲ್ಲಿನ ಹೆಚ್ಚಳದಿಂದ ಕಾಮಗಾರಿಯ ಕಾರ್ಯವ್ಯಾಪ್ತಿ (Scope of work) ಮಾರ್ಪಾಡುಗೊಂಡು ಹೆಚ್ಚುವರಿ ಆರ್ಥಿಕ ಇಂಗಿತಾರ್ಥ ಉಂಟಾದ ಪ್ರಯುಕ್ತ, ರೂ.450.00 ಕೋಟಿ ಮೊತ್ತದ ಪರಿಷ್ಕೃತ ಅಂದಾಜಿಗೆ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆಯುವ ಪ್ರಕ್ರಿಯೆದಿಂದಾಗಿ ಕಾಮಗಾರಿಯ ಪ್ರಗತಿ ವಿಳಂಬವಾಗಿದೆ.<br><br>ಮುಂದುವರೆದು, ಸದರಿ ಯೋಜನೆಯ ರೈಸಿಂಗ್ ಮೇನ್‌ಗಾಗಿ ಸುಮಾರು 80 ಎಕರೆ ಜಮೀನಿನ ಭೂಸ್ವಾಧೀನ ಅವಶ್ಯವಿದ್ದು, ಇದರಲ್ಲಿ ತುಮಕೂರು ಜಿಲ್ಲೆಯ ಕುಣಿಗಲ್ ತಾಲ್ಲೂಕಿನ ಒಟ್ಟು 23 ಎ 3½ ಗು ಪ್ರದೇಶವು 9 ಗ್ರಾಮಗಳ ವ್ಯಾಪ್ತಿಗೆ ಬರುತ್ತಿದ್ದು, 11(1) ಅಧಿಸೂಚನೆ ಹೊರಡಿಸಲಾಗಿದೆ. ರಾಮನಗರ ಜಿಲ್ಲೆಯ ಮಾಗಡಿ ತಾಲ್ಲೂಕಿನ ಒಟ್ಟು 57 ಎಕರೆ ಪ್ರದೇಶವು 19 ಗ್ರಾಮಗಳ ವ್ಯಾಪ್ತಿಗೆ ಬರುತ್ತಿದ್ದು, ನೇರ ಖರೀದಿ ಪ್ರಕ್ರಿಯೆಯಿಂದ 23ಎ 28ಗು ನೋಂದಣಿಯಾಗಿದೆ. ಉಳಿದ 33 ಎ 12 ಗು ಪ್ರದೇಶಕ್ಕೆ 11(1) ಅಧಿಸೂಚನೆ ಹೊರಡಿಸಲಾಗಿದೆ. |

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| | | ಗ್ರಾವಿಟಿ ಮೈನ್ ಅಲೈನ್‌ಮೆಂಟ್ ಮುಂಚಿತವಾಗಿ ಖಾಸಗಿ ಜಮೀನಿನಲ್ಲಿ ಹಾದು ಹೋಗುತ್ತಿರುವುದನ್ನು ಪಥ ಬದಲಾವಣೆಗೆ ಒಳಪಡಿಸಿ, ರಸ್ತೆ ಬದಿಯಲ್ಲಿ ಹಾದು ಹೋಗುವಂತೆ ಮಾರ್ಗವನ್ನು ಮಾರ್ಪಡಿಸಲಾಯಿತು. ಇದರಿಂದಾಗಿ 110 ಎಕರೆ ಜಮೀನಿನ ಬದಲಾಗಿ, 30 ಎಕರೆ ಜಮೀನನ್ನು ಭೂಸ್ವಾಧೀನ ಪಡಿಸಿಕೊಳ್ಳಬೇಕಾಗಿರುತ್ತದೆ. ಎ.ಡಿ.ಎಲ್.ಆರ್., ಮಾಗಡಿ ರವರಿಂದ ರೆವಿನ್ಯೂ ಸ್ಕೆಚ್ ಪಡೆಯುವ ಪ್ರಕ್ರಿಯೆ ಜಾರಿಯಲ್ಲಿದೆ. |
| ಇ | ಈ ಯೋಜನೆ ಪ್ರಾರಂಭಿಸಲು ಸರ್ಕಾರ ನಿಗಧಿಪಡಿಸಿದ ಅನುದಾನವೆಷ್ಟು; | ಯೋಜನೆಯ ಭೌತಿಕ ಕಾಮಗಾರಿಯ ಪ್ರಗತಿ ಆಧರಿಸಿ ಈವರೆಗೂ ರೂ.151.59 ಕೋಟಿಗಳು ವೆಚ್ಚವಾಗಿದ್ದು, ಪ್ರಸಕ್ತ 2021-22ನೇ ಸಾಲಿನಲ್ಲಿ ರೂ.62.55 ಕೋಟಿಗಳು ಅನುದಾನ ಹಂಚಿಕೆಯಾಗಿದೆ. |
| ಈ | ಈ ಯೋಜನೆ ಇನ್ನು ಪ್ರಾರಂಭವಾಗದಿದ್ದಲ್ಲಿ ಯಾವಾಗ ಪ್ರಾರಂಭಿಸಲಾಗುವುದು; ಯಾವಾಗ? | ಯೋಜನೆಯು ದಿನಾಂಕ:23.12.2015 ರಂದು ಪ್ರಾರಂಭವಾಗಿದ್ದು, ತಾಂತ್ರಿಕ ಕಾರಣಗಳಿಂದ ಕಾಮಗಾರಿಯ ಕಾರ್ಯವ್ಯಾಪ್ತಿಯು (Scope of Work) ಮಾರ್ಪಾಡುಗೊಂಡ ಹಿನ್ನೆಲೆಯಲ್ಲಿ ಹಾಗೂ ಅಗತ್ಯವಿರುವ ಜಮೀನಿನ ಭೂಸ್ವಾಧೀನ ಪ್ರಕ್ರಿಯೆಯಲ್ಲಿನ ವಿವಾದಾಂಶದಿಂದಾಗಿ ಕಾಮಗಾರಿಯ ಪ್ರಗತಿ ವಿಳಂಬವಾಗಿದೆ. ಉಳಿಕೆ ಕಾಮಗಾರಿಗಳನ್ನು ದಿನಾಂಕ:31-12-2022 ರೊಳಗೆ ಪೂರ್ಣಗೊಳಿಸಲು ಅಗತ್ಯ ಕ್ರಮವಹಿಸಲಾಗುತ್ತಿದೆ. |

***ಸಂಖ್ಯೆ:ಜಸಂಇ 198 ಎನ್‌ಎಲ್‌ಎ 2021***

(ಗೋವಿಂದ ಎಂ. ಕಾರಜೋಳ)
ಜಲಸಂಪನ್ಮೂಲ ಸಚಿವರು